





(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ ○

1. ಸುಭದ್ರ ಕೋಟೆಗಳಿರುವ ಆಕಾಶದಾಣೆ,[1]

وَالسَّمَآءِ ذَاتِ الْبُرُوْجِ ﴿١﴾

2. ವಾಗ್ದಾನ ಮಾಡಲಾಗಿರುವ ಆ ದಿನದ ಆಣೆ-

وَالْيَوْمِ الْمَوْعُوْدِ ﴿٢﴾

3. ಮತ್ತು ನೋಡುವವನ ಹಾಗೂ ನೋಡಲ್ಪಡುವ ವಸ್ತು[2]ವಿನ ಆಣೆ.

وَشَاهِدٍ وَّمَشْهُوْدٍ ﴿٣﴾

4. ಹೊಂಡದವರು ನಾಶವಾದರು-

قُتِلَ اَصْحٰبُ الْاُخْدُوْدِ ﴿٤﴾

5. ಭೀಕರವಾಗಿ ಧಗಧಗಿಸುವ ಇಂಧನದ ಬೆಂಕಿ ತುಂಬಿದ್ದ (ಹೊಂಡದವರು)-

النَّارِ ذَاتِ الْوَقُوْدِ ﴿٥﴾

6. ಅವರು ಆ ಹೊಂಡದ ಅಂಚಿನಲ್ಲಿ ಕುಳಿತಿದ್ದಾಗ-

اِذْ هُمْ عَلَيْهَا قُعُوْدٌ ﴿٦﴾

7. ಮತ್ತು ಸತ್ಯವಿಶ್ವಾಸಿಗಳ ಮೇಲೆ ತಾವು ಮಾಡುತ್ತಿದ್ದುದನ್ನು ವೀಕ್ಷಿಸುತ್ತಿದ್ದಾಗ.[3]

وَّهُمْ عَلٰى مَا يَفْعَلُوْنَ بِالْمُؤْمِنِيْنَ شُهُوْدٌ ﴿٧﴾

8. ಆ ಸತ್ಯವಿಶ್ವಾಸಿಗಳೊಂದಿಗೆ ಅವರ ಹಗೆತನವು, ಪ್ರಚಂಡನೂ

وَمَا نَقَمُوْا مِنْهُمْ اِلَّآ اَنْ يُّؤْمِنُوْا

1. ಅರ್ಥಾತ್- ಆಕಾಶದ ಉಜ್ವಲ ನಕ್ಷತ್ರ ಮತ್ತು ಗ್ರಹಗಳು.
2. ನೋಡುವವನು ಎಂದರೆ ಪುನರುತ್ಥಾನ ದಿನದಂದು ಹಾಜರಾಗುವ ಪ್ರತಿಯೊಬ್ಬ ವ್ಯಕ್ತಿ ಎಂದಾಗಿದೆ. ನೋಡಲಾಗುವ ವಸ್ತುವೆಂದರೆ ಸಾಕ್ಷಾತ್ ಪುನರುತ್ಥಾನ ದಿನವೇ ಆಗಿದೆ. ಅದರ ಭಯಾನಕ ಸ್ಥಿತಿಯನ್ನು ನೋಡುವವರೆಲ್ಲರೂ ನೋಡುವರು.
3. 'ಹೊಂಡದವರು' ಎಂದರೆ ದೊಡ್ಡ ದೊಡ್ಡ ಹೊಂಡಗಳನ್ನು ತೋಡಿ ಅದರಲ್ಲಿ ಬೆಂಕಿಯನ್ನು ಉರಿಸಿ ಸತ್ಯವಿಶ್ವಾಸಿಗಳನ್ನು ಅದರೊಳಗೆಸೆದು ಅವರು ಹೊತ್ತಿ ಉರಿಯುವ ದೃಶ್ಯವನ್ನು ಕಂಡು ಸಂತೋಷ ಪಟ್ಟವರು. ನಾಶವಾದರು ಎಂದರೆ ಅವರು ದೇವಶಾಪಕ್ಕೆ ಈಡಾದರು ಮತ್ತು ಯಾತನೆಗೆ ಅರ್ಹರಾದರು ಎಂದಾಗಿದೆ.

ಸ್ವಯಂ ಸ್ತುತ್ಯರ್ಹನೂ ಆಗಿರುವ ಅಲ್ಲಾಹನ ಮೇಲೆ ಅವರು ವಿಶ್ವಾಸವಿರಿಸುತ್ತಾರೆಂಬುದರ ಹೊರತು ಬೇರಾವುದೇ ಕಾರಣ ದಿಂದಾಗಿರಲಿಲ್ಲ.

بِاللّٰهِ الْعَزِيْزِ الْحَمِيْدِ ۙ ﴿٨﴾

9. ಅವನು ಭೂಮಿ ಮತ್ತು ಆಕಾಶಗಳ ಸಾಮ್ರಾಜ್ಯದ ಅಧಿಪತಿಯಾಗಿದ್ದಾನೆ. ಆ ಅಲ್ಲಾಹನು ಸಕಲವನ್ನೂ ವೀಕ್ಷಿಸುತ್ತಿರುವನು.

الَّذِيْ لَهٗ مُلْكُ السَّمٰوٰتِ وَالْاَرْضِ ۭ وَاللّٰهُ عَلٰي كُلِّ شَيْءٍ شَهِيْدٌ ۭ ﴿٩﴾

10. ಯಾರು ಸತ್ಯವಿಶ್ವಾಸಿಗಳಾದ ಸ್ತ್ರೀ-ಪುರುಷರ ಮೇಲೆ ಮರ್ದನವೆಸಗಿದರೋ ಮತ್ತು ಆ ಬಳಿಕ ಪಶ್ಚಾತ್ತಾಪ ಪಡಲಿಲ್ಲವೋ ಅವರಿಗೆ ಖಂಡಿತವಾಗಿಯೂ ನರಕದ ಯಾತನೆ ಇದೆ ಮತ್ತು ಅವರಿಗೆ ಸುಡುವ ಯಾತನೆ ಇದೆ.

اِنَّ الَّذِيْنَ فَتَنُوا الْمُؤْمِنِيْنَ وَالْمُؤْمِنٰتِ ثُمَّ لَمْ يَتُوْبُوْا فَلَهُمْ عَذَابُ جَهَنَّمَ وَلَهُمْ عَذَابُ الْحَرِيْقِ ۭ ﴿١٠﴾

11. ಸತ್ಯವಿಶ್ವಾಸವನ್ನು ಸ್ವೀಕರಿಸಿದವರಿಗೆ ಮತ್ತು ಸತ್ಕರ್ಮವೆಸಗಿದವರಿಗೆ ನಿಶ್ಚಯವಾಗಿ ಸ್ವರ್ಗೋದ್ಯಾನಗಳಿವೆ. ಅವುಗಳ ತಳಭಾಗದಲ್ಲಿ ಕಾಲುವೆಗಳು ಹರಿಯುತ್ತಿರುವುವು. ಇದುವೇ ಮಹಾ ಯಶಸ್ಸು.

اِنَّ الَّذِيْنَ اٰمَنُوْا وَعَمِلُوا الصّٰلِحٰتِ لَهُمْ جَنّٰتٌ تَجْرِيْ مِنْ تَحْتِهَا الْاَنْهٰرُ ڛ ذٰلِكَ الْفَوْزُ الْكَبِيْرُ ۭ ﴿١١﴾

12. ನಿಜಕ್ಕೂ ನಿಮ್ಮ ಪ್ರಭುವಿನ ಹಿಡಿತವು ಬಹಳ ಕಠಿಣವಾದುದು.

اِنَّ بَطْشَ رَبِّكَ لَشَدِيْدٌ ۭ ﴿١٢﴾

13. ಅವನೇ ಪ್ರಥಮ ಬಾರಿ ಸೃಷ್ಟಿಸುತ್ತಾನೆ ಮತ್ತು ಅವನೇ ಪುನಃ ಸೃಷ್ಟಿಸುವನು.

اِنَّهٗ هُوَ يُبْدِئُ وَيُعِيْدُ ۚ ﴿١٣﴾

14. ಮತ್ತು ಅವನು ಮಹಾಕ್ಷಮಾಶೀಲನೂ ಪ್ರೀತಿಸುವವನೂ ಆಗಿರುತ್ತಾನೆ-

وَهُوَ الْغَفُوْرُ الْوَدُوْدُ ۙ ﴿١٤﴾

15. ಅವನು ವಿಶ್ವಸಿಂಹಾಸನದ ಒಡೆಯನು,

ذُو الْعَرْشِ الْمَجِيْدُ ۙ ﴿١٥﴾

16. ಪರಮೋನ್ನತನು ಮತ್ತು ತಾನಿಚ್ಛಿಸಿದ್ದನ್ನು ಮಾಡಿಬಿಡುವವನು.

فَعَّالٌ لِّمَا يُرِيْدُ ۭ ﴿١٦﴾

17. ನಿಮಗೆ ಸೇನೆಗಳ ಸಮಾಚಾರ ತಲುಪಿದೆಯೇ?

هَلْ اَتٰىكَ حَدِيْثُ الْجُنُوْدِ ۙ ﴿١٧﴾

18. ಫಿರ್‌ಔನ್ ಮತ್ತು ಸಮೂದರ (ಸೇನೆಗಳ ಸಮಾಚಾರ?)

فِرْعَوْنَ وَثَمُوْدَ ۭ ﴿١٨﴾

19. ಆದರೆ, ಸತ್ಯನಿಷೇಧಿಗಳು ಸುಳ್ಳಾಗಿಸುವುದರಲ್ಲೇ ಮಗ್ನರಾಗಿದ್ದಾರೆ-

بَلِ الَّذِيْنَ كَفَرُوْا فِيْ تَكْذِيْبٍ ۙ ﴿١٩﴾

20. ವಸ್ತುತಃ ಅಲ್ಲಾಹನು ಅವರನ್ನು ಸುತ್ತುವರಿದಿದ್ದಾನೆ.

وَّاللّٰهُ مِنْ وَّرَاۗىِٕهِمْ مُّحِيْطٌ ۚ ﴿٢٠﴾

21. (ಅವರ ನಿರಾಕರಣೆಯಿಂದ ಈ ಕುರ್‌ಆನಿಗೇನೂ ನಷ್ಟವಿಲ್ಲ) ವಾಸ್ತವದಲ್ಲಿ ಈ ಕುರ್‌ಆನ್ ಅತ್ಯುನ್ನತ ಮಟ್ಟದ್ದಾಗಿದೆ-

بَلْ هُوَ قُرْاٰنٌ مَّجِيْدٌ ﴿٢١﴾

22. ಸುರಕ್ಷಿತವಾಗಿರುವ ಹಾಳೆಯಲ್ಲಿ (ಮುದ್ರಿತವಿದೆ).[4]

فِىْ لَوْحٍ مَّحْفُوْظٍ ﴿٢٢﴾

ع

---

4. ಅರ್ಥಾತ್- ಕುರ್‌ಆನಿನಲ್ಲಿ ಲಿಖಿತವಾಗಿರುವ ವಿಷಯಗಳು ಅಚಲವಾದುದಾಗಿದೆ. ಅದು ಯಾವ ಬದಲಾವಣೆಯನ್ನೂ ಮಾಡಲಾಗದ 'ಲೌಹಿಮ್ಮ್ಹಫೂಝ್' (ಸುರಕ್ಷಿತ ಫಲಕ)ನಲ್ಲಿ ದಾಖಲಿಸಲ್ಪಟ್ಟಿದೆ.